# ಕರ್ಟ್ ಝೂಡೆಕ್ ಲೆವಿನ್ (1890-1947)

## ಇಂದಿರಾ ಜೈಪ್ರಕಾಶ್



***

ಲೆವಿನ್ ನನ್ನು ಸಮಾಜಮನೋವಿಜ್ಞಾನದ ಜನಕ (founder of social psychology) ಎಂದು ಗುರುತಿಸಲಾಗಿದೆ. ಸಮಾಜಮನೋವಿಜ್ಞಾನ ಮಾನವ ವರ್ತನೆಯ ಸಾಮಾಜಿಕ ಸ್ವರೂಪ ಮತ್ತು ಕಾರಣಗಳನ್ನು ಪರೀಕ್ಷಿಸುವ ಕ್ಷೇತ್ರ. ಇವನು ಅಂದಿನ ಪ್ರಶಿಯಾ(ಇಂದಿನ ಪೋಲೆಂಡ್)ದಲ್ಲಿ ಮಧ್ಯಮವರ್ಗದ ಯಹೂದಿ ಕುಟುಂಬದಲ್ಲಿ ಹುಟ್ಟಿದ. ತನ್ನ 15 ನೆಯ ವಯಸ್ಸಿನಲ್ಲಿ ವಿದ್ಯಾಭ್ಯಾಸಕ್ಕೆಂದು ಬರ್ಲಿನ್ ನಗರಕ್ಕೆ ಬಂದು ನೆಲೆಸಿದ. ವೈದ್ಯಕೀಯ ವಿದ್ಯಾಭ್ಯಾಸದ ನಂತರ ಜೀವಶಾಸ್ತ್ರವನ್ನು ಅಧ್ಯಯನಮಾಡಿ ಬರ್ಲಿನ್ ವಿಶ್ವವಿದ್ಯಾಲಯದಲ್ಲಿ ಉಪನ್ಯಾಸಕನಾಗಿದ್ದ. ಜರ್ಮನಿಯಲ್ಲಿ ಯಹೂದಿಗಳ ಮೇಲೆ ದೌರ್ಜನ್ಯ ಹೆಚ್ಚಾದಾಗ, 1933ರಲ್ಲಿ ನಾಜಿಗಳಿಂದ ತಪ್ಪಿಸಿಕೊಂಡು ಅಮೆರಿಕೆಗೆ ಬಂದು ಹಲವೆಡೆ ಕೆಲಸ ಮಾಡಿ ಮಸಾಚುಸೆಟ್ಸ್ ಇನ್ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಯಲ್ಲಿ ಗುಂಪುಗತಿಶೀಲತಾ (Group Dynamics) ಅಧ್ಯಯನ ಕೇಂದ್ರದ ಮುಖ್ಯಸ್ಥನಾದ. ಐಯೋವಾ ವಿಶ್ವವಿದ್ಯಾಲಯ ಸೇರಿ 1945ರ ವರೆಗೆ ಅಲ್ಲೇ ಕೆಲಸ ಮಾಡಿದ. 1946 ರಲ್ಲಿ ಅಮೆರಿಕೆಯ ಸರ್ಕಾರ ಇವನನ್ನು ಧಾರ್ಮಿಕ ಮತ್ತು ಜನಾಂಗೀಯ ಪೂರ್ವಗ್ರಹಗಳನ್ನು ಬದಲಿಸುವ ವಿಧಾನ ಕಂಡುಹಿಡಿಯಲು ನಿಯಮಿಸಿತು. ಇವನು ಪ್ರಾರಂಭಿಸಿದ “ಪರಿವರ್ತನೆ ಪ್ರಯೋಗಗಳು” ಮುಂದೆ ಸಂವೇದೀಕರಣ ತರಬೇತಿ (Sensitivity training) ಮತ್ತು ನ್ಯಾಶನಲ್ ಟ್ರೇನಿಂಗ್ (National training lab.) ಲ್ಯಾಬೋರೇಟರಿಗಳ ಸ್ಥಾಪನೆಗೆ ಕಾರಣವಾಯಿತು. ಎರಡನೆಯ ವಿಶ್ವಸಮರದ ನಂತರ ಹಾರ್ವರ್ಡ್ ಮೆಡಿಕಲ್ ಸ್ಕೂಲ್‌ನ ಜೊತೆ ಸೇರಿ ನಿರಾಶ್ರಿತರಿಗೆ ಪುನರ್ವಸತಿ ಕಲ್ಪಿಸುವ ಕೆಲಸ ಮಾಡಿದ್ದನು.

ಮೊದಲು ವರ್ತನಾವಾದವನ್ನು ಅಭ್ಯಸಿಸಿದ ಲೆವಿನ್ ಕಾಲಾನಂತರ ಗೆಸ್ಟಾಲ್ಟ್ ಸಿದ್ಧಾಂತದ ಕಡೆ ಆಕರ್ಷಿತನಾದ. ಲೆವಿನ್ ಮಂಡಿಸಿದ ‘ಕ್ಷೇತ್ರ ಸಿದ್ಧಾಂತ (Field theory)’ ಸಾಮಾಜಿಕ ಮನೋವಿಜ್ಞಾನದಲ್ಲಿ ಸಂಶೋಧನೆಗಳಿಗೆ ಹೊಸ ಆಯಾಮ ನೀಡಿತು. ಈ ಸಿದ್ಧಾಂತದ ಪ್ರಕಾರ ಮಾನವ ವರ್ತನೆಗೆ ವ್ಯಕ್ತಿಯ ವಿಶಿಷ್ಟ ಗುಣಗಳು ಮತ್ತು ಪರಿಸರದ ನಡುವಿನ ಅಂತರಕ್ರಿಯೆ ಕಾರಣ. ಸಾಮಾಜಿಕ ವರ್ತನೆಯನ್ನು ಅಭ್ಯಸಿಸಲು ವೈಜ್ಞಾನಿಕ ವಿಧಾನಗಳನ್ನು ಬಳಸಿದವರಲ್ಲಿ ಈತ ಮೊದಲಿಗ. 1944 ರ ಹೊತ್ತಿಗೆ ‘ಕ್ರಿಯಾತ್ಮಕ ಸಂಶೋಧನೆ (Action research)’ ಎಂಬ ಪದ

ಹುಟ್ಟುಹಾಕಿ ಸಾಮಾಜಿಕ ಪರಿವರ್ತನೆಗೆ ಸಂಶೋಧನೆ ಹೇಗೆ ಮೂಲವಾಗಬಹುದು ಎಂದು ತೋರಿಸಿಕೊಟ್ಟ. ಲಿಪಿಟ್ ಮತ್ತು ವೈಟ್ ಎಂಬುವರ ಜೊತೆಗೆ ಗುಂಪುಗಳಲ್ಲಿ ನಾಯಕತ್ವ ಶೈಲಿಗಳನ್ನು ಅಭ್ಯಸಿಸಿ ಅಧಿಕಾರಶಾಹಿ (authoritarian), ಪ್ರಜಾತಂತ್ರಾತ್ಮಕ (democratic) ಮತ್ತು ತಟಸ್ಥ ನೀತಿ/ ಕನಿಷ್ಠ ಮಧ್ಯಸ್ಥಿಕೆ (French word laissez-faire) ಎಂಬ ಮೂರು ವಿಧಗಳನ್ನು ಗುರುತಿಸಿದ.

ಲೆವಿನ್, ತನ್ನ ಗೆಸ್ಟಾಲ್ಟ್ ಅಧ್ಯಯನಗಳ ಆಧಾರದ ಮೇಲೆ ಗುಂಪು ತನ್ನ ಎಲ್ಲಾ ಸದಸ್ಯರ ಒಟ್ಟುಗೂಡುವಿಕೆಗಿಂತಾ ಹೆಚ್ಚಿನ ಗುಣ ಹೊಂದಿರುತ್ತದೆ ಎಂದು 1947ರಲ್ಲಿ ಗುಂಪುಗತಿಶೀಲತೆ (group dynamics) ಎಂಬ ಸಂಕಲ್ಪನೆ ನೀಡಿದ. ಗುಂಪಿನ ಉತ್ಪಾದಕತೆ, ಗುಂಪುಗಳಲ್ಲಿ ಸಂವಹನ, ಗುಂಪುಗಳ ನಡುವಿನ ಸಂಬಂಧಗಳು, ನಾಯಕತ್ವ ಹೇಗೆ ನಿರ್ಧರಿತವಾಗುತ್ತದೆ ಮುಂತಾದ ವಿಷಯಗಳನ್ನು ಪ್ರಯೋಗಕ್ಕೆ ಒಳಪಡಿಸಿದ. ವರ್ತನೆಗೆ ಕಾರಣವನ್ನು ಉದಾದಹರಿಸಲು ಅವನು ಬಳಸಿದ ಸಮೀಕರಣ ಬಿ=ಎಫ್(ಪಿ,ಇ) ಎಂದರೆ ವರ್ತನೆ(ಬಿ) ವ್ಯಕ್ತಿತ್ವ (ಪಿ) ಮತ್ತು ವಾತಾವರಣ (ಇ) ದ ಕಾರ್ಯ (ಎಫ್) ವನ್ನು 'ಲೆವಿನ್‌ನ ಸಮೀಕರಣ (Lewin equation $B = f(P, E)$' ಎನ್ನಲಾಗುತ್ತದೆ. ಸಾಮಾಜಿಕ ಸನ್ನಿವೇಶಗಳಲ್ಲಿ ಗುರಿಮುಟ್ಟಲು ಅಥವಾ ಅದಕ್ಕೆ ಅಡ್ಡವಾಗುವ ಬಲಗಳನ್ನು ನಿರ್ಧರಿಸಲು ಇವನು "ಕ್ಷೇತ್ರ ಬಲ ವಿಶ್ಲೇಷಣೆ (Force-field equation)' ಬಳಸಿದನು. ಮುಂದೆ ಇದನ್ನು ಜಾನ್ ಫ್ರೆಂಚ್ ಔದ್ಯೋಗಿಕ ಮತ್ತು ಸಂಘಟನಾ ಕ್ಷೇತ್ರಕ್ಕೆ ವಿಸ್ತರಿಸಿದ.

ಲೆವಿನ್ 'ಜೆನ್-ಐಡೆಂಟಿಟಿ (Gen-Identity)" ಎಂದು ಸಮಯ-ವ್ಯೋಮಗಳ ಸಂಬಂಧದ (Time-Space relation) ಅಧ್ಯಯನಕ್ಕೆ ಉಪಯುಕ್ತ ತಾರ್ಕಿಕ ಸಂಕಲ್ಪನೆಯನ್ನೂ ನೀಡಿದ್ದ. ಹದಿಹರೆಯದವರ ಗುಂಪುಯುದ್ಧಗಳನ್ನು (gang wars) ತಡೆಯುವುದು; ನಿಗ್ರೋಗಳನ್ನು ಅಂಗಡಿಗಳು, ಕಚೇರಿಗಳು ಮುಂತಾದಕಡೆ ನೇಮಿಸಿಕೊಳ್ಳಲು ಇರುವ ವಿರೋಧವನ್ನು ಅಳಿಸುವುದು; ಸಾಮಾಜಿಕ ತಾರತಮ್ಯತೆ ತೊಡೆಯಲು ಕಾನೂನು ಸುಧಾರಿಸುವುದು ಮುಂತಾದ ವಿಷಯಗಳ ಬಗ್ಗೆ ವೈಜ್ಞಾನಿಕವಾದ ವಿಧಾನಗಳನ್ನು ಸೂಚಿಸಿದ್ದ. 1946 ರಲ್ಲಿ ಹೊರಬಿದ್ದ ಇವನ 'ಫ್ರಾಂಟಿಯರ್ ಇನ್ ಗ್ರೂಪ್ ಡೈನಾಮಿಕ್ಸ್ (Frontiers in Group Dynamics)' ಒಂದು 'ಕ್ಲಾಸಿಕ್' ಗ್ರಂಥ ಎನಿಸಿದೆ. ಇವನನ್ನು ಗುಂಪು ಗತಿಶೀಲತೆ ಮತ್ತು ಸಂಘಟನಾ ವಿಕಾಸದ ಪ್ರಥಮ ಸಂಶೋಧಕ ಎಂದು ಕರೆಯಲಾಗುತ್ತದೆ.

ಸಿದ್ಧಾಂತಗಳು, ತತ್ವಗಳ ಪ್ರಾಮುಖ್ಯತೆಯನ್ನು ಒಪ್ಪಿಕೊಂಡರೂ, ಲೆವಿನ್ ಅವುಗಳ ಅನ್ವಯಿಕತೆ ಹೆಚ್ಚು ಮುಖ್ಯ ಎಂದು ತಿಳಿದಿದ್ದನು. ಲೆವಿನ್ ಸ್ವತಹ ಯಹೂದಿಯಾಗಿದ್ದ ಕಾರಣಕ್ಕೆ ಶೊಷಣೆಗೆ ಒಳಗಾಗಿದ್ದವನು, ಯಹೂದಿಗಳು ಗುಳೆಯೆದ್ದು ಹೋಗಿದ್ದು ಅವರ ಸ್ವ-ಕಲ್ಪನೆ ಮತ್ತು ಅನನ್ಯತೆಯ ಮೇಲೆ ಬೀರುವ ಪ್ರಬಾವದ ಬಗ್ಗೆ ಕುತೂಹಲ ಹೊಂದಿದ್ದನು. ತನ್ನ ಕುಟುಂಬದವರನ್ನು ನಾಜಿಗಳಿಂದ ಪಾರುಮಾಡಲು ಅವನಿಗೆ ಸಾಧ್ಯವಾಗಿರಲಿಲ್ಲ. ಲೆವಿನ್‌ಗೆ ಸಾಮಾಜಿಕ ಸಮಸ್ಯೆಗಳ ಬಗ್ಗೆ ತೀವ್ರ ಕಾಳಜಿಯಿದ್ದು ಮನೋವಿಜ್ಞಾನದ ಸಂಪನ್ಮೂಲ (Psychological resource)ವನ್ನೆಲ್ಲಾ ಅವುಗಳ ಪರಿಹಾರಕ್ಕೆ ಮೀಸಲಿಡುವ ಬದ್ಧತೆಯಿತ್ತು. ತನ್ನ 57ನೆಯ ವಯಸ್ಸಿನಲ್ಲಿ ಹೃದಯಾಘಾತದಿಂದ ಮರಣ ಹೊಂದಿದ ಲೆವಿನ್ ತನ್ನ ಸಮಕಾಲೀನರಿಂದ "ಸಂಪೂರ್ಣ ಸಾಮಾಜಿಕ ವಿಜ್ಞಾನಿ" ಎಂದು ಕರೆಸಿಕೊಂಡಿದ್ದಾನೆ.

***